# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2215 |
| 2 | ಸದಸ್ಯರ ಹೆಸರು | ಶ್ರೀ ಗೋವಿಂದರಾಜು |
| 3 | ಉತ್ತರಿಸುವ ದಿನಾಂಕ | 18-03-2022 |
| 4 | ಉತ್ತರಿಸುವವರು | ಮಾನ್ಯ ರೇಷ್ಮೆ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು |

| | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ರೇಷ್ಮೆ ಹುಳುಗಳಿಗೆ ಬರುತ್ತಿರುವ ರೋಗದ ನಿಯಂತ್ರಣಕ್ಕೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ರೇಷ್ಮೆ ಹುಳುಗಳಿಗೆ ತಗಲುವ ರೋಗಗಳ ನಿಯಂತ್ರಣ ಹಾಗೂ ಮುಂಜಾಗ್ರುತ ಕ್ರಮಗಳ ಬಗ್ಗೆ ವಿಸ್ತರಣಾ ಸಿಬ್ಬಂದಿಗಳು ರೇಷ್ಮೆ ಬೆಳೆಗಾರರಲ್ಲಿ ಕ್ಷೇತ್ರೋತ್ಸವ, ಕಾರ್ಯಾಗಾರಗಳಲ್ಲಿ ಹಾಗೂ ಬೆಳೆಗಳ ಪರಿವೀಕ್ಷಣಾ ಸಮಯದಲ್ಲಿ ಅರಿವು ಮೂಡಿಸುತ್ತಿದ್ದಾರೆ. ರೇಷ್ಮೆ ಹುಳುಗಳಿಗೆ ತಗುಲುವ ರೋಗಗಳ ನಿಯಂತ್ರಣಕ್ಕೆ ರೇಷ್ಮೆ ಬೆಳೆಗಾರರಿಗೆ ಉಚಿತವಾಗಿ ಸೋಂಕು ನಿವಾರಕಗಳು, ಹಾಸಿಗೆ ಸೋಂಕು ನಿವಾರಕಗಳನ್ನು ಒದಗಿಸಿ ರೋಗ ನಿಯಂತ್ರಣ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ. |
| ಆ | ರೇಷ್ಮೆ ಹುಳುಗಳಿಗೆ ನೀಡಲಾಗುವ ಹಿಪ್ಪುನೇರಳೆ ಸೊಪ್ಪಿಗೆ ಕ್ರಿಮಿಕೀಟಗಳ ಬಾಧೆ ಹೆಚ್ಚಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಸರ್ಕಾರದ ಗಮನಕ್ಕೆ ಬಂದಿದೆ |
| ಇ | ಬಂದಿದ್ದಲ್ಲಿ, ಈ ಬಗ್ಗೆ ಯಾವ ಕ್ರಮ ಕೈಗೊಳ್ಳಲಾಗಿದೆ: ಹಾಗೂ ಇದರ ನಷ್ಟಕ್ಕೆ ರೈತರಿಗೆ ಪರಿಹಾರವನ್ನು ನೀಡಲಾಗಿದೆಯೇ: | ವಿಜ್ಞಾನಿಗಳ ಶಿಫಾರಸ್ಸಿನಂತೆ ಭೌತಿಕ ವಿಧಾನ, ರಾಸಾಯನಿಕ ವಿಧಾನ ಮತ್ತು ಜೈವಿಕ ವಿಧಾನಗಳಿಂದ ಹತೋಟಿ ಕ್ರಮಗಳ ಬಗ್ಗೆ ಅರಿವು ಮೂಡಿಸಲು ಕ್ಷೇತ್ರಮಟ್ಟದಲ್ಲಿ ಗುಂಪು ಚರ್ಚೆ, ಕ್ಷೇತ್ರೋತ್ಸವ, ರೈತರಿಂದ ರೈತರಿಗೆ ತರಬೇತಿ ಹಾಗೂ ರೈತರ ತೋಟಗಳಲ್ಲಿ ಪ್ರಾತ್ಯಕ್ಷತಾ ತರಬೇತಿ ಹಾಗೂ ಕರ ಪತ್ರಗಳ ಮೂಲಕ ಹೆಚ್ಚು ಹೆಚ್ಚಾಗಿ ಪ್ರಚಾರ ಪಡಿಸಿ ಅವಶ್ಯ ತಾಂತ್ರಿಕ ಸಲಹೆಗಳನ್ನು ನೀಡಲಾಗುತ್ತಿದೆ. |
| ಈ | ಕೀಟಗಳನ್ನು ನಿಯಂತ್ರಿಸಲು ಉಪಯೋಗಿಸುವ ಕೀಟನಾಶಕ ಔಷಧಿಗಳನ್ನು ಉತ್ಪಾದಿಸುವ ಕಂಪನಿಗಳು ಸರ್ಕಾರದಿಂದ ಅನುಮತಿ ಪಡೆದಿದ್ದಾರೆಯೇ; ಅನುಮತಿ ನೀಡಿದ್ದಲ್ಲಿ, ಇದಕ್ಕೆ ಅನುಮತಿ ನೀಡಿದ ಇಲಾಖೆ ಅಥವಾ ಏಜೆನ್ಸಿ ಯಾವುದು; | ಕೀಟಗಳನ್ನು ನಿಯಂತ್ರಿಸಲು ಉಪಯೋಗಿಸುವ ಕೀಟನಾಶಕ ಔಷಧಿಗಳನ್ನು ಉತ್ಪಾದಿಸುವ ಕಂಪನಿಗಳಿಗೆ ರೇಷ್ಮೆ ಇಲಾಖೆಯಿಂದ ಯಾವುದೇ ಅನುಮತಿ ನೀಡಿರುವುದಿಲ್ಲ. ಡೈಮಿಥೋಯೇಟ್, ವೆಟಬಲ್ ಸಲ್ಫರ್ ಕೀಟನಾಶಕ ಔಷಧಿಗಳನ್ನು ಉತ್ಪಾದಿಸುವ ಕಂಪನಿಗಳು ಕೃಷಿ ಇಲಾಖೆಯಿಂದ ಅನುಮತಿ ಪಡೆದಿರುತ್ತಾರೆ. ಉಳಿದಂತೆ, ಕೇಂದ್ರ ರೇಷ್ಮೆ ಸಂಶೋಧನ ಮತ್ತು ತರಬೇತಿ ಸಂಸ್ಥೆ, ಮೈಸೂರು ಹಾಗೂ ಕರ್ನಾಟಕ ರಾಜ್ಯ ಸಂಶೋಧನ ಮತ್ತು ಅಭಿವೃದ್ಧಿ ಸಂಸ್ಥೆ, ತಲಘಟ್ಟಪುರ, ವಿಜ್ಞಾನಿಗಳು, ಗಾಂಧಿಕೃಷಿ ವಿಶ್ವ ವಿದ್ಯಾನಿಲಯ, ಬೆಂಗಳೂರುರವರು ಶಿಫಾರಸ್ಸು ಮಾಡಿರುವ ಎಕೋ ನಿಮ್ ಅಜಾದಿರಕ್ಟಿನ್, ಕ್ಲೋರ್ಫೆನಾಪೈರ್, ವಿಡಿ ಗ್ರೀನ್ ಪಾತ್, ಸ್ನೈಲ್ ಗಾರ್ಡ್(ಮೆಟಾಲ್ಡಿಹೈಡ್) ಸ್ನೈಲ್ ಕಿಲ್, ಫೆನಜಾಕ್ವಿನ್(ಮೆಜಿಸ್ಟರ್), ಡೈಕೋಪಾಲ್, ಪ್ರಾವರ್ ಗ್ರೆಟ್, ಸ್ಪೆನೋಫೈರಾಫಿನ್(ಕುನೊಯಿಚಿ), ಕೀಟ ನಾಶಕಗಳನ್ನು ಕ್ಷೇತ್ರಮಟ್ಟದಲ್ಲಿ ಬಳಸಿ ಕೀಟಗಳನ್ನು ನಿಯಂತ್ರಿಸಲು ವ್ಯಾಪಕ ಪ್ರಚಾರ ನೀಡಲಾಗಿದೆ. |

| | | |
|---|---|---|
| ಉ | ರೇಷ್ಮೆ ಗುಣಮಟ್ಟದ ಬೆಳೆಗಳನ್ನು ಬೆಳೆಯಲು ರೈತರಿಗೆ ಕಾಲಕಾಲಕ್ಕೆ ಸಲಹೆ ಮತ್ತು ಮಾರ್ಗದರ್ಶನ ನೀಡಲು ಯಾವ ಅಧಿಕಾರಿಗಳನ್ನು ಸರ್ಕಾರದಿಂದ ನೇಮಿಸಲಾಗಿದೆ; | ರೇಷ್ಮೆ ಗುಣಮಟ್ಟದ ಬೆಳೆಗಳನ್ನು ಬೆಳೆಯಲು ಕಾಲ ಕಾಲಕ್ಕೆ ಸಲಹೆ ಮತ್ತು ಮಾರ್ಗದರ್ಶನ ನೀಡಲು ಇಲಾಖಾ ಅಧಿಕಾರಿಗಳನ್ನು ನೋಡೆಲ್ ಅಧಿಕಾರಿಯನ್ನಾಗಿ ಪ್ರತಿಯೊಂದು ಜಿಲ್ಲೆಗೆ ನೇಮಿಸಲಾಗಿದೆ.<br><br>ಕೇಂದ್ರ ರೇಷ್ಮೆ ಸಂಶೋಧನೆ ಮತ್ತು ತರಬೇತಿ ಸಂಸ್ಥೆ, ಮೈಸೂರು ಹಾಗೂ ಕರ್ನಾಟಕ ರಾಜ್ಯ ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆ, ತಲಘಟ್ಟಪುರರವರು ಕಾಲಕಾಲಕ್ಕೆ ರೇಷ್ಮೆ ಬೆಳೆಯನ್ನು ಬೆಳೆಯಲು ಸಲಹೆ ಹಾಗೂ ಮಾರ್ಗದರ್ಶನವನ್ನು ನೀಡುತ್ತಿದ್ದಾರೆ.<br><br>ರೇಷ್ಮೆ ಇಲಾಖೆ ಮತ್ತು ಕರ್ನಾಟಕ ರಾಜ್ಯ ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆ, ತಲಘಟ್ಟಪುರ ಹಾಗೂ ಎಸ್.ಎಸ್.ಟಿ.ಎಲ್, ಕೊಡತಿ (ಸಿಲ್ಕ್‌ವರ್ಮ್ ಸೀಡ್ ಟೆಕ್ನಾಲಜಿ ಲ್ಯಾಬೊರೇಟರಿ) ಕೇಂದ್ರ ರೇಷ್ಮೆ ಮಂಡಳಿ ವಿಜ್ಞಾನಿಗಳ ಸಹಯೋಗದೊಂದಿಗೆ ಬಿತ್ತನೆ ವಲಯಗಳಲ್ಲಿ ಮುಖ್ಯವಾಗಿ ರೋಗರಹಿತ ಬಿತ್ತನೆ ಗೂಡುಗಳನ್ನು ಒದಗಿಸಲು ವಿಶೇಷವಾದ ರೋಗನಿಯಂತ್ರಣ ಹಾಗೂ ನಿರ್ವಹಣಾ ಕ್ರಮಗಳನ್ನು ವೈಜ್ಞಾನಿಕವಾಗಿ ನಿರ್ವಹಿಸುತ್ತಿದೆ ಹಾಗೂ ಸಂಶೋಧನಾ ಸಂಸ್ಥೆಗಳು ನಿಯಮಬದ್ಧ ಸಮೀಕ್ಷೆ ನಡೆಸಿ, ರೇಷ್ಮೆ ಹುಳುವಿನ ಗಂಟು ರೋಗದ ಸಮಗ್ರ ನಿರ್ವಹಣೆಯನ್ನು ಕೈಗೊಳ್ಳುತ್ತಿದ್ದಾರೆ.<br><br>ಗುಣಮಟ್ಟದ ರೇಷ್ಮೆ ಬೆಳೆಗಳನ್ನು ಬೆಳೆಯಲು ಕಾಲಕಾಲಕ್ಕೆ ಸಲಹೆ ಮತ್ತು ಮಾರ್ಗದರ್ಶನ ನೀಡಲು ಕ್ಷೇತ್ರಮಟ್ಟದಲ್ಲಿ ಹೋಬಳಿವಾರು ರೇಷ್ಮೆ ವಿಸ್ತರಣಾಧಿಕಾರಿಗಳು, ರೇಷ್ಮೆ ನಿರೀಕ್ಷಕರು, ರೇಷ್ಮೆ ಪ್ರದರ್ಶಕರು ಮತ್ತು ರೇಷ್ಮೆ ಪ್ರವರ್ತಕರುಗಳು, ತಾಲ್ಲೂಕು ಮಟ್ಟದಲ್ಲಿ ರೇಷ್ಮೆ ಸಹಾಯಕ ನಿರ್ದೇಶಕರು ಕಾರ್ಯ ನಿರ್ವಹಿಸುತ್ತಿದಾರೆ, ಜಿಲ್ಲಾ ಮಟ್ಟದಲ್ಲಿ ರೇಷ್ಮೆ ಉಪ ನಿರ್ದೇಶಕರು ದ್ವಿತಳಿ ಬೆಳೆಗಳ ಪರಿವೀಕ್ಷಣೆ ಮಾಡಿ, ರೇಷ್ಮೆ ಬೆಳೆಗಾರರಿಗೆ ಕಾಲಕಾಲಕ್ಕೆ ಸಲಹೆ ಮತ್ತು ಮಾರ್ಗದರ್ಶನ ನೀಡುತ್ತಿದ್ದಾರೆ ಹಾಗೂ ಗುಣಮಟ್ಟದ ಬೆಳೆಗಳನ್ನು ಬೆಳೆಯಲು ಸರ್ಕಾರದಿಂದ ಸಿಗುವ ಎಲ್ಲಾ ಸವಲತ್ತುಗಳನ್ನು ರೇಷ್ಮೆ ಬೆಳೆಗಾರರು ಪಡೆಯಲು ಸಹಕರಿಸುತ್ತಿದ್ದಾರೆ. |

**ಸಂಖ್ಯೆ:ರೇಷ್ಮೆ 64 ರೇಕೃವಿ 2022**

**(ಡಾ. ನಾರಾಯಣ ಗೌಡ)**
ರೇಷ್ಮೆ ಹಾಗೂ ಯುವ ಸಬಲೀಕರಣ
ಮತ್ತು ಕ್ರೀಡಾ ಸಚಿವರು